# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ ಎನ್ ಎಸ್ - 19

2ನೇ ವರ್ಷ 21ನೇ ಸಂಚಿಕೆ ಕೊಪ್ಪ 20-1-1985 ಭಾನುವಾರ ಬೆಲೆ 40 ಪೈಸೆ


### ಹದಗೆಟ್ಟ ಅಂಚೆ ಮತ್ತು ದೂರವಾಣಿ ವ್ಯವಸ್ಥೆ:

## ಸಂಪರ್ಕ ವಂಚಿತ ಮೇಗೂರು ಪ್ರಾಂತ್ಯ

**ಕೊಪ್ಪ: ಯಾವುದೇ ಸೇವಾ ವ್ಯವಸ್ಥೆ ದಿನಗಳೆದಂತೆ ಸುಧಾರಿಸಬೇಕು; ಬೆಳವಣಿಗೆಯಾದಂತೆ ಜನರಿಗೆ ಸೌಕರ್ಯ ಹೆಚ್ಚಬೇಕು. ಆಗ ಮಾತ್ರ ಆ ವ್ಯವಸ್ಥೆ ಆರೋಗ್ಯಕರ ನಿರ್ವಹಣೆಯಲ್ಲಿದೆ ಎನ್ನಬಹುದು.**

ಆದರೆ ಈ ಮಾತು ನಮ್ಮ ದೇಶದ ಹಲವು ಸಾರ್ವಜನಿಕ ವ್ಯವಸ್ಥೆಗಳಲ್ಲಿ ತಿರುಗುಮುರುಗಾಗಿರುತ್ತದೆ. ಅದರಲ್ಲೂ, ತಾಂತ್ರಿಕ ಪ್ರಗತಿಯಲ್ಲಿ ಕೃತಕ ಉಪಗ್ರಹಗಳನ್ನೂ ಸಹ ಬಳಸಿಕೊಳ್ಳುವ ಮಟ್ಟಕ್ಕೆ ಏರಿರುವ ನಮ್ಮ ದೂರವಾಣಿ ಮತ್ತು ಅಂಚೆ ವ್ಯವಸ್ಥೆ ಹಳ್ಳಿಗಾಡಿನ ಮಟ್ಟಿಗೆ ಮಾತ್ರ ಇನ್ನೂ ಹಿಂದೆ ಹಿಂದಕ್ಕೆ ಹೋಗುತ್ತಿರುವುದು ಹಲವು ಕಡೆ ಕಂಡು ಬರುತ್ತದೆ.

ಕೊಪ್ಪ ತಾಲ್ಲೂಕಿನ, ದುರ್ಗಮವಾದ ಗುಡ್ಡಗಾಡಿನ ಮೇಗೂರು ಪ್ರಾಂತ್ಯ ಇದಕ್ಕೆ ಒಂದು ಉತ್ತಮ ಉದಾಹರಣೆ.

**ದೂರವಾಣಿ 'ಡೆಡ್'**

ಇಲ್ಲಿಗೆ ದೂರವಾಣಿ ಸಂಪರ್ಕವನ್ನು ಶಾಂತಿಗ್ರಾಮ ವಿನಿಮಯ ಕೇಂದ್ರದಿಂದ ಕೊಡಲಾಗಿದೆ. ಈಗ 34 ಫೋನುಗಳು ಸಂಪರ್ಕ ಪಡೆದಿರುವ ಈ ಕೇಂದ್ರದಲ್ಲಿ ಸುತ್ತಮುತ್ತ ಕಾಫಿ ತೋಟಗಳಿಂದಾಗಿ ಒಳ್ಳೆಯ ಟ್ರಂಕ್ ಕಾಲ್ ಆದಾಯವಿದೆ.

ಆದರೆ ಇಲ್ಲಿನ ಸೆಲೆಕ್ಟರ್ ಬೋರ್ಡ್ ತೀರಾ ಹಳೆಯದಾಗಿದ್ದು, ಟೆಲಿಫೋನ್ ಬಳಕೆದಾರರಿಗೆ ಬಹಳ ಸಮಸ್ಯೆಗಳನ್ನೊಡ್ಡುತ್ತಿದೆ. ಬಹಳ ಕಾಲ 'ಡೆಡ್' ಆಗಿಯೇ ಇರುವ ಫೋನು. ಆಕಸ್ಮಾತ್ 'ಜೀವಂತ' ವಿದ್ದಾಗಲೂ 'ಕ್ರಾಸ್-ಟಾಕ್' ಬರುವುದು, ಡಯಲ್-ಟೋನ್ ತುಂಡಾಗದಿರುವುದು- ಮುಂತಾದ ಸಮಸ್ಯೆಗಳಿಂದಾಗಿ ಇದ್ದೂ ಇಲ್ಲದಂತಿರುತ್ತದೆ. (ಟೆಲಿಫೋನ್ ಬಾಡಿಗೆ ಬಿಲ್ ಮಾತ್ರ ಯಾವ ಮುಲಾಜಿಲ್ಲದೆ 3 ತಿಂಗಳಿಗೊಮ್ಮೆ ಬರುತ್ತಿರುತ್ತದೆ!) ಇಲ್ಲಿಗೆಂದು ಮಂಜೂರಾದ ಸೆಲೆಕ್ಟರ್ ಬೋರ್ಡನ್ನು ಬೇರೆಲ್ಲಿಗೋ ಒಯ್ದರಂತೆ.

**ಕುಂಟಿ ಸಾಗುವ ಅಂಚೆ**

ಇನ್ನು ಈ ಪ್ರದೇಶದ ಮೇಗೂರು, ಕಲ್ಲುಗುಡ್ಡೆ, ಬಿಳಾಲುಕೊಪ್ಪ ಅಂಚೆ ಕಚೇರಿಗಳ ಅಂಚೆ ವ್ಯವಸ್ಥೆ ಹಿಂದಿನ ರಾಜ ಮಹಾರಾಜರ ಕಾಲದಲ್ಲಿದ್ದಂತೆ ಇದೆ. (ಕುದುರೆ ಸವಾರನೊಬ್ಬ ಟಪ್ಪಾಲನ್ನು ಹೊತ್ತು ಒಂದು ನಿರ್ದಿಷ್ಟ ಸ್ಥಳಕ್ಕೆ ತಲುಪಿಸುವುದು, ಅಲ್ಲಿಂದ ಇನ್ನೊಬ್ಬ ಇನ್ನಷ್ಟು ದೂರದ ಊರಿಗೆ ಮುಟ್ಟಿಸುವುದು, ಅಲ್ಲಿಂದ ಮತ್ತೊಬ್ಬ—ಈ ಕ್ರಮದಲ್ಲಿ ಕಡೆಗೊಮ್ಮೆ ಪತ್ರಗಳು ಗುರಿ ಮುಟ್ಟುತ್ತಿದ್ದ ಹಾಗೆ.)

ಕೊಪ್ಪ ಮುಖ್ಯ ಅಂಚೆ ಕಚೇರಿಯಿಂದ ಈ ಕಚೇರಿಗಳಿಗೆ ಬರುವ ಅಂಚೆ ಚೀಲಗಳು ಒಂದು ದಿನ ಬಸರೀಕಟ್ಟೆಯವರೆಗೆ ಹೋಗಿ ತಂಗುತ್ತವೆ. ಮರುದಿನ ಶಾಂತಿಗ್ರಾಮಕ್ಕೆ ಬಂದು ತಂಗುತ್ತವೆ. ಅದರ ಮರು ದಿನ ಸದರಿ ಕಚೇರಿಗಳಿಗೆ ಒಯ್ಯುತ್ತಾರೆ. (ಬಿಳಲುಕೊಪ್ಪಕ್ಕೆ ಮಾತ್ರ 2 ನೇ ದಿನ ಸಿಗುತ್ತೆ.) ಅನಂತರ ಹಂತ ಹಂತವಾಗಿ, ವಿತರಣೆ ಆಗಬೇಕು.

ಹಿಂದೆ ಈ ಶಾಖಾ ಕಚೇರಿಗಳಿಗೆ ಜಯಪುರ ಅಕೌಂಟ್ ಆಫೀಸ್ ಆಗಿದ್ದಾಗ ಇದಕ್ಕಿಂತ 1 ದಿನ ಬೇಗನೆ ತಲುಪುತ್ತಿತ್ತು. ಇಲಾಖೆಯ ಬೆಳವಣಿಗೆಯಿಂದ ಬಸರಿಕಟ್ಟೆ ಅಂಚೆ ಕಚೇರಿಯನ್ನು ಮೇಲ್ದರ್ಜೆಗೆ ಏರಿಸಿ ಈ ಶಾಖೆಗಳು ಅದಕ್ಕೆ ಲಗತ್ತಿಸಲ್ಪಟ್ಟವು. ಹೀಗೆ ಇಲಾಖೆಯಲ್ಲಿ ಬಡಾವಣೆ ಆದರೂ ಅಂಚೆ ವ್ಯವಸ್ಥೆ ಮಾತ್ರ ಇನ್ನೂ ಹಿಂದಕ್ಕೆ ಹೋಯಿತು.

ಈ ಪರಿಸ್ಥಿತಿಯನ್ನು ಸುಧಾರಿಸಲು ಇಲಾಖೆಗೆ ಸಾಧ್ಯವಿಲ್ಲವೆ? ಜನರ ಸೌಕರ್ಯದ ಕಾಳಜಿ ಅಧಿಕಾರಿಗಳಿಗಿದ್ದರೆ ಯಾಕೆ ಸಾಧ್ಯವಿಲ್ಲ? ಇದನ್ನೇ ಜನ ಕೇಳುತ್ತಿದ್ದಾರೆ.

### ಜಿಲ್ಲಾ ಲೇಖಕರ ಸಂಘದ ಆಶ್ರಯದಲ್ಲಿ

## ಯಶಸ್ವಿ ಜಿಲ್ಲಾ ಸಾಹಿತ್ಯ ಸಮ್ಮೇಳನ

ಚಿಕ್ಕಮಗಳೂರು: ಜಿಲ್ಲಾ ಲೇಖಕರ ಸಂಘ ಏರ್ಪಡಿಸಿದ್ದ 2 ದಿನಗಳ ಜಿಲ್ಲಾ ಸಾಹಿತ್ಯ ಸಮ್ಮೇಳನ ಇಲ್ಲಿ ಜ. 12 ಮತ್ತು 13 ರಂದು ಯಶಸ್ವಿಯಾಗಿ ನಡೆಯಿತು.

ಸಮ್ಮೇಳನವನ್ನು ಉದ್ಘಾಟಿಸಿದ ಡಾ|| ಸಾ. ಶಿ. ಮರುಳಯ್ಯ, ಜೀವಂತ ಕಾವ್ಯ ಸೃಷ್ಟಿಸಿ, ಜನಪದ ಕಲೆ ರಕ್ಷಿಸಿ, ಜಾನಪದ ಕಲಾಕಾರರನ್ನು ಗುರುತಿಸುವ ಕೆಲಸದಲ್ಲಿ ತೊಡಗಲು ಜಿಲ್ಲೆಯ ಲೇಖಕರಿಗೆ ಕರೆ ನೀಡಿದರು.

ಓದುಗರಲ್ಲಿ ಅಸಂಗತ ಪ್ರವೃತ್ತಿ ಹುಟ್ಟಿಸದಂತಹ, ಸದ್ಯದ ಸ್ಥಿತಿಗತಿಗಳಿಗೆ ಸ್ಪಂದಿಸುವ, ಪುರಾಣ ಪ್ರಸಂಗಗಳ ಪೊಳ್ಳು ಬಯಲಿಗೆಳೆವ ಸಾಹಿತ್ಯ ರಚಿಸುವಂತೆ ಪ್ರಸಿದ್ಧ ಜನಪದ ಸಾಹಿತಿ ಗೊ.ರು. ಚನ್ನಬಸಪ್ಪ ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಕರೆ ನೀಡಿದರು.

ಸಮ್ಮೇಳನದ ಸ್ಮರಣ ಸಂಚಿಕೆ "ಮಲೆಯ ಮಲ್ಲಿಗೆ"ಯನ್ನು ವಿಧಾನಸಭಾಧ್ಯಕ್ಷ ಡಿ. ಬಿ. ಚಂದ್ರೇಗೌಡ ಬಿಡುಗಡೆ ಮಾಡಿದರು. ಗೌ ರು. ಓಂಕಾರಯ್ಯ ಅವರ 'ಸೆಳೆವು' ಕಾದಂಬರಿ, ಬಾಣೂರು ಚನ್ನಪ್ಪ ಅವರ 'ಬಯಲು' ಕವನ ಸಂಕಲನ, ಎಂ. ಬಿ. ಗಂಗಾಧರ್ ಸಂಪಾದಿಸಿದ ಜಿಲ್ಲೆಯ ಚಿತ್ರ ಕಲಾವಿದರ ಪರಿಚಯ ಕೈಪಿಡಿ 'ಕಲಾ ಜ್ಯೋತಿ' ಇವನ್ನು ಜಿಲ್ಲಾಧಿಕಾರಿ ಬಿ. ಪಾರ್ಥಸಾರಥಿ ಬಿಡುಗಡೆ ಮಾಡಿದರು.

ಜಿಲ್ಲೆಯ ಉದಯೋನ್ಮುಖ ಕವಿ-ಕಲಾವಿದ-ಬರಹಗಾರರು ಪಾಲ್ಗೊಂಡಿದ್ದ ಜಿಲ್ಲಾ ದರ್ಶನ ಗೋಷ್ಠಿ, ಕವಿಗೋಷ್ಠಿ, ಸಾಹಿತ್ಯ ಗೋಷ್ಠಿ ಮುಂತಾದ ಗೋಷ್ಠಿಗಳೂ, ಕಲಾ ಪ್ರದರ್ಶನ, ಸಾಂಸ್ಕೃತಿಕ ಕಾರ್ಯಕ್ರಮಗಳೂ ಉತ್ತಮವಾಗಿ ನಡೆದವು.

### ಹರಿಹರಪುರ, ಬಾಳೆಹೊನ್ನೂರಿಗೆ

## ಪೋಲೀಸ್ ಠಾಣೆ

ಕೊಪ್ಪ: ಬಾಳೆಹೊನ್ನೂರು ಮತ್ತು ಹರಿಹರಪುರಗಳಿಗೆ ಪೋಲೀಸ್ ಠಾಣೆ ಮಂಜೂರಾಗಿದ್ದು ಬರುವ ಏಪ್ರಿಲ್ ಮೊದಲ ವಾರದಲ್ಲಿ ಪ್ರಾರಂಭಗೊಳ್ಳುವುದೆಂದು ವರದಿಯಾಗಿದೆ.

ಪ್ರತಿ ಠಾಣೆಗೆ ಒಬ್ಬ ಸಬ್ ಇನ್ಸ್‌ಪೆಕ್ಟರ್, ಒಬ್ಬ ಸಹಾಯಕ ಸಬ್ ಇನ್ಸ್‌ಪೆಕ್ಟರ್, ನಾಲ್ಕು ಜನ ಮುಖ್ಯ ಪೇದೆಗಳು ಹಾಗೂ ಇಪ್ಪತ್ತನಾಲ್ಕು ಜನ ಪೇದೆಗಳಿರುತ್ತಾರೆಂದು ಹೇಳಲಾಗಿದೆ.

### ಅರಣ್ಯ ಕಂಟ್ರಾಕ್ಟರ್ ಸೋಗಿನಲ್ಲಿ

## 80 ಸಾವಿರ ರೂ. ವಂಚನೆ

ಕೊಪ್ಪ: ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನ ಖೋಟಾ ಚಲನ್, ಸೀಲು ಬಳಸಿ, ಅರಣ್ಯ ಇಲಾಖೆಗೆ ಸುಮಾರು 80 ಸಾವಿರ ರೂ. ವಂಚಿಸಿದ್ದಾನೆನ್ನಲಾಗಿರುವ ಹಿರಣ್ಣಯ್ಯ ಎಂಬಾತನನ್ನು ಪೋಲೀಸರು ಬಂಧಿಸಿ ಆತನಿಂದ ನಕಲಿ ವಸ್ತುಗಳನ್ನು ವಶಪಡಿಸಿಕೊಂಡಿರುವುದಾಗಿ ವರದಿಯಾಗಿದೆ.

ಇಲಾಖೆ ನಾಟಾ ಹರಾಜು ಹಾಕಿದಾಗ ಈತ ಮಧ್ಯವರ್ತಿಯಾಗಿ ವ್ಯವಹಾರದಲ್ಲಿ ಪ್ರವೇಶಿಸಿ, ವಂಚಿಸುತ್ತಿದ್ದನೆನ್ನಲಾಗಿದೆ.

ಈತನ ವಂಚನೆಯ ಪ್ರಕರಣ ಈಚೆಗೆ ಪತ್ತೆಯಾಗಿದ್ದು, ಈತ ಅರಣ್ಯ ಇಲಾಖೆಗೆ, ಸಾ ಮಿಲ್ ಮಾಲೀಕರಿಗೆ ಹಾಗೂ ಅರಣ್ಯ ಕಂಟ್ರಾಕ್ಟರ್‌ಗಳಿಗೆ ಮಾಡಿರುವ ವಂಚನೆಯ ಬಗ್ಗೆ ತೀವ್ರ ತನಿಖೆ ನಡೆಯುತ್ತಿದೆ.

ಅರಣ್ಯ ಕಂಟ್ರಾಕ್ಟರನೆಂಬ ನೆಪದಲ್ಲಿ ಈತ ಸಾಗರ, ಸೊರಬ, ಶಿವಮೊಗ್ಗ ಮೊದಲಾದ ಕಡೆಗಳಲ್ಲೂ ಇಂಥದೇ ವಂಚನೆ ಎಸಗಿದ್ದನೆನ್ನಲಾಗಿದೆ.

## ಉತ್ಸವಗಳು

ಕೊಪ್ಪ: ಇಲ್ಲಿಗೆ ಸಮೀಪದ ಉತ್ತಮೇಶ್ವರ ದೇವಸ್ಥಾನದಲ್ಲಿ ಜ. 22 ರಿಂದ ಜಾತ್ರೆ ಮತ್ತು 24 ರಂದು ರಥೋತ್ಸವ ನಡೆಯುತ್ತವೆ.

ಬಸರೀಕಟ್ಟೆಯಲ್ಲಿ ಫೆ. 10 ರಂದು ಮಹಾ ರಥೋತ್ಸವ ನಡೆಯಲಿದ್ದು, ಫೆ. 9 ರಿಂದ 12 ರ ವರೆಗೂ ವಿವಿಧ ಉತ್ಸವಗಳು ನಡೆಯುತ್ತವೆ.

## ರಾಷ್ಟ್ರೀಯ ಸೇವಾ ಯೋಜನೆ ಶಿಬಿರ

ಕೊಪ್ಪ: ರಾಷ್ಟ್ರೀಯ ಸೇವಾ ಯೋಜನೆಯ ಕೊಪ್ಪ ಪ್ರಥಮ ದರ್ಜೆ ಕಾಲೇಜು ಘಟಕದವರಿಂದ ಇಲ್ಲಿನ ಚಲನ ಚಿತ್ರ ಮಂದಿರದ ಹಿಂಭಾಗದ ಬಯಲನ್ನು ಮಟ್ಟ ಮಾಡುವ ಶ್ರಮದಾನ ಶಿಬಿರ ಜ. 16 ರಂದು ಆರಂಭವಾಯಿತು.

ಜ. 26 ರ ವರೆಗೆ 10 ದಿನಗಳ ಕಾಲ ನಡೆಯುವ ಈ ಶಿಬಿರವನ್ನು ಪ್ರ. ದ. ಕಾಲೇಜು ಪ್ರಿನ್ಸಿಪಾಲ್ ಕೆ. ವಿ. ಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಪಿ. ಜಿ. ಗುರ್ಜರ್ ಉದ್ಘಾಟಿಸಿದರು. ತಹಸೀಲ್ದಾರ್ ಎಸ್. ಕರೀಗೌಡ ಮುಖ್ಯ ಅತಿಥಿಗಳಾಗಿದ್ದರು.

**ಸಾರ್ವಜನಿಕರಿಂದ**

ರಾ. ಸೇ. ಯೋಜನೆಯ ಶಿಬಿರದ ಮೂಲಕವಲ್ಲದೆ ಸಾರ್ವಜನಿಕರ ಸಹಾಯದಿಂದಲೂ ಈ ಬಯಲನ್ನು ಮಟ್ಟಗೊಳಿಸುವ ಕೆಲಸ ನಡೆಯುತ್ತಿದೆ. ಕೊಪ್ಪದ ಕ್ರೀಡಾಭಿವೃದ್ಧಿ ಸಮಿತಿಯಲ್ಲಿ ಉಳಿದಿದ್ದ ಹಣ, ಸಾರ್ವಜನಿಕ ವಂತಿಗೆ, ಪುರಸಭೆಯ ಸುಮಾರು 5 ಸಾವಿರ ರೂ. ವಂತಿಗೆ ಮುಂತಾಗಿ ಒಟ್ಟು ಸುಮಾರು 18 ಸಾವಿರ ರೂ. ವೆಚ್ಚದಲ್ಲಿ ಈ ಕಾಮಗಾರಿ ನಡೆದಿದೆ. ಇತ್ತ ತಾ|| ಅಧಿಕಾರಿಗಳ ಕ್ಲಬ್ ಮತ್ತು ಲಯನ್ಸ್ ಕ್ಲಬ್‌ನವರೂ ವಾರಕ್ಕೊಂದು ದಿನ ಶ್ರಮದಾನವನ್ನು ಕಳೆದ ಕೆಲ ತಿಂಗಳಿಂದಲೂ ಮಾಡಿಕೊಂಡು ಬರುತ್ತಿದ್ದಾರೆ.

### ಪತ್ರಕರ್ತ ಹೆಗ್ಡೆಯವರ ನಿಧನಕ್ಕೆ ಶೋಕ

ಚಿಕ್ಕಮಗಳೂರು: ರಾಜ್ಯದ ಹಿರಿಯ ಪತ್ರಕರ್ತರಲ್ಲೊಬ್ಬರಾಗಿದ್ದ ಮಂಗಳೂರಿನ ಶ್ರೀ ಎಂ.ವಿ. ಹೆಗ್ಡೆ ಅವರ ನಿಧನಕ್ಕೆ ಚಿಕ್ಕಮಗಳೂರು ಪತ್ರಕರ್ತರ ಸಂಘ ತೀವ್ರ ಶೋಕ ವ್ಯಕ್ತಪಡಿಸಿದೆ.

## ಓದುಗರ ಪತ್ರ

# "ಯಕ್ಷಗಾನ ಪ್ರದರ್ಶನದ ಗುತ್ತಿಗೆ ನಿಲ್ಲಲಿ"

ಮಾನ್ಯರೆ,

ಕಲೋಪಾಸನೆಯ ನೆಲೆಯಾದ ಶೃಂಗೇರಿಯಲ್ಲಿ ಈಚೆಗೆ ಕೆಲವರು ಯಕ್ಷಗಾನ ಕಲೆಯನ್ನು ಸ್ವಲಾಭಕ್ಕೆ ಉಪಯೋಗಿಸಿಕೊಳ್ಳುವುದಲ್ಲದೆ ಜನತೆಗೆ ಮೋಸ ಮಾಡುತ್ತಿದ್ದಾರೆ.

ಇವರು ಇಲ್ಲಿಗೆ ಬರುವ ಯಕ್ಷಗಾನ ಮೇಳಗಳ ಆಟವನ್ನು ಕಂಟ್ರಾಕ್ಟ್ ವಹಿಸಿಕೊಳ್ಳುತ್ತಾರೆ. ಮನಸಾ ಇಚ್ಛೆ ಪ್ರವೇಶ ಧನ ಇಡುತ್ತಾರೆ. ಪ್ರೇಕ್ಷಕರಿಗೆ ಸರಿಯಾದ ವ್ಯವಸ್ಥೆ ಇರುವುದಿಲ್ಲ.

ಕೆಲವೊಮ್ಮೆ ಆ ಮೇಳದ ಪ್ರಸಿದ್ಧ ಕಲಾವಿದರು ಆ ದಿನ ಇರುವುದಿಲ್ಲ. ಇದು 'ಕಂಟ್ರಾಕ್ಟ್ ಪಡೆದ 'ವ್ಯವಸ್ಥಾಪಕ'ರಿಗೆ ಗೊತ್ತಿದ್ದೂ ಸುಮ್ಮನಿರುತ್ತಾರೆ. ಏಕೆಂದರೆ, ಇದರಿಂದ ಮೇಳದವರಿಗೆ ಕಡಿಮೆ ಹಣ ಕೊಟ್ಟರೆ ಸಾಕಾಗುತ್ತೆ.

ಆದರೆ ಪ್ರೇಕ್ಷಕರು ಸದರಿ ಕಲಾವಿದರ ಬಗ್ಗೆ ವ್ಯವಸ್ಥಾಪಕರಲ್ಲಿ ವಿಚಾರಿಸಿದರೆ "ಈಗ ಬರುತ್ತಾರೆ, ಇನ್ನು ಸ್ವಲ್ಪ ಹೊತ್ತಿಗೆ ಬರುತ್ತಾರೆ" ಎಂದು ಸಬೂಬು ಹೇಳುತ್ತ 12 ಗಂಟೆಯ ಹೊತ್ತಿಗೆ ನಾಪತ್ತೆ ಆಗಿಬಿಡುತ್ತಾರೆ. (ಇನ್ನು ಕೆಲವೊಮ್ಮೆ, ಕೆಲವು ಪ್ರಸಿದ್ಧ ಕಲಾವಿದರು ತಮ್ಮ ದುಶ್ಚಟಗಳ ಕಾರಣ ರಂಗಸ್ಥಳಕ್ಕೆ ಬರುವ ಸ್ಥಿತಿಯಲ್ಲೇ ಇರುವುದಿಲ್ಲ.)

ಇನ್ನು ಮುಂದಾದರೂ ಖಾಸಗಿ ವ್ಯಕ್ತಿಗಳು ವಹಿಸಿಕೊಂಡ ಪ್ರದರ್ಶನಕ್ಕೆ ಯದ್ವಾತದ್ವಾ ಪ್ರವೇಶಧನ ವಿಧಿಸದೆ, ಪ್ರೇಕ್ಷಕರಿಗೆ ಸರಿಯಾಗಿ ಸೌಲಭ್ಯ ಕಲ್ಪಿಸಬೇಕು. ಜನರಿಗೆ ಮೋಸವಾಗದೆ ಒಳ್ಳೆಯ ಆಟ ಸಿಗುವಂತಾಗಬೇಕು.

ಧರ್ಮಸ್ಥಳ ಮೇಳದವರಂತೆ ಉಳಿದ ಮೇಳಗಳವರೂ ಖಾಸಗಿ ವ್ಯಕ್ತಿಗಳಿಗೆ ಪ್ರದರ್ಶನ ವಹಿಸಿ ಕೊಡುವುದಿಲ್ಲವೆಂಬ ನೀತಿ ಅನುಸರಿಸಬೇಕು.

ಅದಿಲ್ಲದೆ ಪರಿಸ್ಥಿತಿ ಹೀಗೇ ಮುಂದುವರಿದರೆ ಶೃಂಗೇರಿ ಮತ್ತು ಆಸುಪಾಸಿನ ಕಲಾಭಿಮಾನಿಗಳು ಸರಿಯಾದ ಕ್ರಮ ತೆಗೆದುಕೊಳ್ಳಬೇಕಾಗುತ್ತೆ.

**—ನೊಂದ ಕಲಾಭಿಮಾನಿಗಳು,**
ಶೃಂಗೇರಿ.
(15 ಜನರ ಸಹಿಗಳಿವೆ)

# ಸಣ್ಣ ಕಾಫಿ ಬೆಳೆಗಾರರಿಗೆ ಸೌಲಭ್ಯ

ಬಾಳೆಹೊನ್ನೂರು: ಇಲ್ಲಿನ ಸುತ್ತಮುತ್ತಲ ರೊಬಸ್ಟಾ ಸಣ್ಣ ಕಾಫಿ ಬೆಳೆಗಾರರ ಸೌಲಭ್ಯಕ್ಕಾಗಿ ಕಾಫಿ ಮಂಡಳಿಯ ವಿಸ್ತರಣಾ ವಿಭಾಗವು ಚೆರಿ ಕಾಫಿಯ ಸಿಪ್ಪೆ ತೆಗೆದು ಬೀಜ ಬೇರ್ಪಡಿಸುವ (ಹಲ್ಲಿಂಗ್) ಸಂಚಾರಿ ಯಂತ್ರವೊಂದನ್ನು ಇಲ್ಲಿ ವ್ಯವಸ್ಥೆ ಮಾಡಿದೆ.

ಇದರಿಂದ ಸಣ್ಣ ಬೆಳೆಗಾರರಿಗೆ ಸಾಗಣೆ ವೆಚ್ಚ ಮೂರನೇ ಒಂದು ಭಾಗದಷ್ಟಾಗುತ್ತದೆ; ಡಿಪ್ರೋಕ್ಕೆ ಒಯ್ದಾದ ಚೆರಿಯಲ್ಲಿ ಕಲ್ಲಿನ, ಒಣಗಿಲ್ಲ-ಮುಂತಾದ ಕಾರಣಗಳಿಗಾಗಿ ಹಣವಲ್ಲಿ ಕಡಿತ ಆಗುವುದು ತಪ್ಪಿ ಪೂರ್ಣ ಮುಂಗಡ ದೊರೆಯುತ್ತದೆ; ಕಾಫಿಯ ಹೊಟ್ಟು ಪೂರ್ತಿಯಾಗಿ ಬೆಳೆಗಾರರಿಗೇ ಸಿಗುತ್ತದೆ ಹಾಗೂ ಕುಟ್ಟುವಾಗ ಬೀಜ ನುಚ್ಚಾಗುವಂತೆ ಇದರಲ್ಲಿ ನುಚ್ಚಾಗದೆ ಉತ್ತಮ ದರ್ಜೆಯ ಬೀಜ ಸಿಗುತ್ತದೆ.

ಈ ಸೌಲಭ್ಯಕ್ಕಾಗಿ ಅತಿ ಕಡಿಮೆ ಶುಲ್ಕ ವಿಧಿಸಲಾಗುತ್ತದೆ. ಸಣ್ಣ ಬೆಳೆಗಾರರು ತಾವು ಹಲ್ ಮಾಡಬೇಕಾಗಿರುವ ಕಾಫಿಯ ಪ್ರಮಾಣವನ್ನು ಇಲ್ಲಿನ ಕಾಫಿ ಮಂಡಳಿ ಕಿ॥ ಸಂಪರ್ಕಾಧಿಕಾರಿಯವರಿಗೆ ತಿಳಿಸಿ, ಸೂಕ್ತ ದಿನ ಮತ್ತು ಸ್ಥಳ ನಿಗದಿಮಾಡಿಕೊಳ್ಳಬೇಕು.

### ಕಾಫಿ ಸಬ್ಸಿಡಿ

ಹೊಸದಾಗಿ ತೋಟಮಾಡಿ ಕಾಫಿ ಗಿಡ ಹಾಕಿದ ಬಗ್ಗೆ ತೋಟಗಳವರಿಗೆ ಕೊಡುತ್ತಿರುವ ಸಬ್ಸಿಡಿಗಾಗಿ ಅರ್ಜಿ ಕರೆಯಲಾಗಿದೆ. 1981 ರಲ್ಲಿ ಗಿಡ ಹಾಕಿದವರಿಗೆ 2 ನೇ ಕಂತು ಹಾಗೂ 1983 ರ ವರೆಗೆ ಮೊದಲ ಕಂತಿಗಾಗಿ 31-3-85 ರೊಳಗೆ ಅರ್ಜಿ ಸಲ್ಲಿಸಬಹುದು.

1980ರಿಂದ ಕೊಡುತ್ತಿರುವ ಈ ಸಬ್ಸಿಡಿಯನ್ನು ಮುಂದಿನ ಪಂಚ ವಾರ್ಷಿಕ ಯೋಜನೆಗೂ ವಿಸ್ತರಿಸಲಾಗಿದೆ.

(2 ನೇ ಪುಟದಿಂದ)

ಎಲಿಯಾಸ್ ಡಯಾಸ್ ಕೊಪ್ಪ ಪುರಸಭೆಯ ಅಧ್ಯಕ್ಷರೂ, ತಾ.ಅ.ಮಂ. ಸದಸ್ಯರೂ ಆಗಿದ್ದವರು. ಕೆ. ವಿ. ರಾಮಪ್ಪಯ್ಯ ಶೃಂಗೇರಿ ಪುರಸಭೆಯ ಅಧ್ಯಕ್ಷ, ಉಪಾಧ್ಯಕ್ಷ ಪಿ.ಎಲ್.ಡಿ. ಬ್ಯಾಂಕ್ ಅಧ್ಯಕ್ಷ, ತಾ॥ ಕಾಂಗ್ರೆ ಅಧ್ಯಕ್ಷ ಮುಂತಾಗಿ ಹಲವು ಸ್ಥಾನಮಾನಗಳಲ್ಲಿ ಇದ್ದವರು.

'ಪಕ್ಷದ ನಿಧಿಗೆ ಐದೋ ಹತ್ತೋ ಲಕ್ಷ ನೀಡ ಬಲ್ಲವರಿಗೆ ಈ ಬಾರಿ, ಅಭ್ಯರ್ಥಿಯಾಗಿ ಟಿಕೆಟ್ ಕೊಡುತ್ತಾರಂತೆ' ಎಂಬ ಗುಲ್ಲಿನ ಹಿನ್ನೆಲೆಯಲ್ಲಿ ಶಂಕರ್ ಕಂಪನಿಯ ಮಾಲೀಕ ವರ್ಗದ ಎ. ರಮೇಶ್ ರಾವ್ ಈಗಾಗಲೇ ಅಭ್ಯರ್ಥಿಯಾಗಿ ಗಟ್ಟಿಮಾಡಿಕೊಂಡಿದ್ದಾರೆಂಬ ಸುದ್ದಿಯೂ ಇದೆ.

ಡಾ॥ ಹುಲ್ಸೆ ಮಂಜಪ್ಪ ಗೌಡ ಈಗ್ಗೆ 4 ವರ್ಷದಿಂದ ಶೃಂಗೇರಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ಬ್ಯಾಂಕಿಗೆ ರಾಜ್ಯ ಮಟ್ಟದಲ್ಲಿ ಪ್ರಶಸ್ತಿ ಗಳಿಸಿಕೊಡುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಅಲ್ಲದೆ ಪುರಸಭಾ ಸದಸ್ಯರು ಮತ್ತು ತಾ.ವ್ಯ.ಮಾ.ಸ. ಸಂಘದ ನಿರ್ದೇಶಕರೂ ಆಗಿದ್ದಾರೆ. ಅಬ್ದುಸ್ ಸಮದ್ ನ.ರಾ. ಪುರ ತಾ॥ ಕಾಂಗ್ರೆ ಅಧ್ಯಕ್ಷರಾಗಿ ವಿವಿಧ ರಂಗಗಳಲ್ಲಿ ಕೆಲಸ ಮಾಡಿದವರು.

ಹೀಗೆ ಹೇಳಬರೆ, ಘಟಾನುಘಟಿಗಳ ಮೇಲಾಟದಲ್ಲಿ ಯುವಕ ಶ್ರೀನಿವಾಸ್, ಎ.ಸಿ. ವಜ್ರಪ್ಪ, ಟಿ.ಆರ್. ಶಂಕರ ಹೆಗ್ಡೆ, ಕೆ.ಆರ್ ಸತೀಶ್ ಇವರುಗಳು ಟಿಕೆಟ್ಟಿಗಾಗಿ ಅರ್ಜಿ ಹಾಕಿದ್ದಾರಂತೆ.

# ಶೃಂಗೇರಿ ಕ್ಷೇತ್ರಕ್ಕೆ ಅಭ್ಯರ್ಥಿಗಳು ಯಾರು ಯಾರು ?

ಯುವಕ ಶ್ರೀನಿವಾಸ್, ವಜ್ರಪ್ಪ ಮತ್ತು ಶಂಕರ ಹೆಗ್ಡೆ ಇವರುಗಳಾದರೂ ಪಕ್ಷದಲ್ಲಿ ಮತ್ತು ಸಾರ್ವಜನಿಕ ಆಡಳಿತದಲ್ಲಿ ಹಲವೆಡೆ ಕೆಲಸ ಮಾಡಿದವರು. ಸತೀಶ್ ಮಾತ್ರ ಯಾವ ಸರಕನ್ನೂ ಬೆನ್ನಿಗೆ ಕಟ್ಟಿಕೊಳ್ಳದೆ ಟಿಕೆಟ್ ಕೇಳುತ್ತಿದ್ದಾರೆ.

ಈ ಎಲ್ಲರೂ ತಮ್ಮ ತಮ್ಮ ಅರ್ಹತೆ, ಸಾಧನೆ, 'ಪ್ಲಸ್ ಪಾಯಿಂಟ್'ಗಳನ್ನು ಮಾತ್ರ ಹೇಳಿಕೊಳ್ಳುತ್ತ, ತಮ್ಮ ಕೋರಿಕೆ ಪಕ್ಷದ ಅಧಿಕೃತ ಅಭ್ಯರ್ಥಿಯಾಗಲಿರುವವರ ವಿರುದ್ಧ ಅಲ್ಲ ಎಂಬುದನ್ನು ಒತ್ತಿ ಒತ್ತಿ ಹೇಳುತ್ತಾರೆ.

ಇದರಲ್ಲಿ ವಜ್ರಪ್ಪ ಅವರ ವಾದ ಸರಣಿ ಗಮನಾರ್ಹವಾಗಿದೆ—"ಪಕ್ಷದ ಅಧ್ಯಕ್ಷ ರಾಜೀವ್ ಗಾಂಧಿಯ ಮನಸ್ಸಿನಲ್ಲಿ ಅಭ್ಯರ್ಥಿಗಳ ಆಯ್ಕೆಯ ಬಗ್ಗೆ ಏನಿದೆಯೋ ಗೊತ್ತಿಲ್ಲ. ಆದರೆ ಸಾಮಾನ್ಯವಾಗಿ, ಸಾಧ್ಯವಾದಲ್ಲೆಲ್ಲ ಹೊಸ ಮುಖ, ಯುವಶಕ್ತಿಯನ್ನು ಅವರು ಮುಂದೆ ತರುತ್ತಿದ್ದಾರೆ.

ಅಕಸ್ಮಾತ್, ಹಿಂದಿನದೇ ಅಭ್ಯರ್ಥಿ ಬೇಡ, ಹಳಬರೂ ಬೇಡ, ಈ ಕ್ಷೇತ್ರದಲ್ಲಿ ಒಂದು ಹೊಸ ಯುವ ನಾಯಕನನ್ನು ನಿಲ್ಲಿಸೋಣ ಎಂದೇನಾದರೂ ಅವರು ಮನಸ್ಸು ಮಾಡಿದರೆ ಆ ಪರಿಗಣನೆಯಲ್ಲಿ ಮೊದಲ ಸ್ಥಾನ ನನ್ನದು ಎಂಬುದು ವಜ್ರಪ್ಪ ಅವರ ವಾದ.

ತಾನು ಹುಟ್ಟಿ ಬೆಳೆದ, ತನ್ನ ತಾಯಿಯ ತವರೂರಾದ ನ. ರಾ. ಪುರ ತಾಲ್ಲೂಕು, ತಾನು 7 ವರ್ಷ ವಿದ್ಯಾರ್ಥಿಯಾಗಿ ಕಳೆದ ಶೃಂಗೇರಿ ತಾ॥ ಹಾಗೂ ಈಗ ರಾಜಕೀಯದಲ್ಲಿ ಸಕ್ರಿಯವಾಗಿರುವ ಕೊಪ್ಪ ತಾ॥— ಹೀಗೆ ಈ ಮೂರು ತಾ॥ ಗಳಲ್ಲೂ ತನಗೆ ಜನ ಸಂಪರ್ಕವಿದೆ, ಸ್ನೇಹಿತರು, ಬೆಂಬಲಿಗರಿದ್ದಾರೆ. ವಿದ್ಯಾರ್ಥಿ ದೆಸೆಯಿಂದಲೂ ಮುಖಂಡತ್ವ ವಹಿಸಿದ ಹಿನ್ನೆಲೆಯಿದೆ. ಆದ್ದರಿಂದ, ಹೊಸಮುಖ—ಯುವಶಕ್ತಿ ಎಂಬ ಈ ಮೂರನೇ ಪರಿಗಣನೆ ಬಂದಲ್ಲಿ ಹೇಗೆ ತನ್ನ ಹೆಸರಿಗ ಮೊದಲ ಆದ್ಯತೆ ಸಲ್ಲುತ್ತದೆಂಬುದನ್ನು ಕು॥ ಡಿ.ಕೆ. ತಾರಾದೇವಿ ಅವರಿಗೂ ಮನವರಿಕೆ ಮಾಡಿಕೊಟ್ಟಿರುವುದಾಗಿ ವಜ್ರಪ್ಪ ಹೇಳುತ್ತಾರೆ.

ಸ್ಥಳೀಯ ಸಂಸತ್ಸದಸ್ಯರು ಹಾಗೂ ಪ್ರದೇಶ ಕಾಂಗ್ರೆಸ್ ಸಮಿತಿ ಒಟ್ಟಾಗಿ ಪ್ರತಿ ಕ್ಷೇತ್ರದಿಂದಲೂ ಮೂವರ ಹೆಸರನ್ನು ಶಿಫಾರ್ಸು ಮಾಡುವಂತೆ ಹೈ ಕಮ್ಯಾಂಡ್ ಕೇಳಿದೆಯೆಂಬ ವರದಿಗಳಿವೆ. ಇಂಥ ಸಂದರ್ಭದಲ್ಲಿ ಈ ಕ್ಷೇತ್ರದಲ್ಲಿ ಯಾರ ಹೆಸರುಗಳು ಸೂಚಿತವಾಗಿವೆಯೆಂಬ ಸುಳಿವು ಸಿಗುತ್ತಿಲ್ಲ ಆದರೆ ತಾರಾದೇವಿಯವರ ದೃಷ್ಟಿಕೋಣದಿಂದ ಬೇಗಾನೆ ರಾಮಯ್ಯನವರಿಗೆ ಹೆಚ್ಚಿನ ಬೆಂಬಲ ಸಿಗಲಾರದೆಂಬುದು ಸಾಮಾನ್ಯ ಊಹೆ.

ಹಾಗಾದಲ್ಲಿ, ಎರಡನೇ ಆದ್ಯತೆ ಬಿ.ಜಿ. ಚಿದಂಬರ್‌ಗೆ ಇರುವಂತೆ ಕಾಣುತ್ತಿದೆ. ಪಕ್ಷದ ಬಹಳ ಕಡೆಗಳ ಕಾರ್ಯಕರ್ತರ ಒಲವೂ ಇವರಿಗೇ ಇರುವುದು ಕಾಣುತ್ತಿದೆ. ತಾ. ಅ. ಮಂ. ಅಧ್ಯಕ್ಷರಾಗಿದ್ದಾಗ, ಸರಕಾರದ ಯಾವ ಯೋಜನೆ, ಯಾವ ಸೌಲಭ್ಯ ಬಂದರೂ "ನಮಗೊಂದಿರಲಿ" ಎಂದು ಕೊಪ್ಪ ತಾ॥ ಗೆ ತಂದವರು. ಅದೇ ರೀತಿ ಕ್ಷೇತ್ರಕ್ಕೂ ಮಾಡಬಲ್ಲ ಜಿಗಣೆಯಂಥ ಮನುಷ್ಯ. ಅವರು-ಇವರು ಎಂದು ಹೆಚ್ಚಿನ ಭೇದ ಭಾವ ತೋರದೆ ಎಲ್ಲರನ್ನೂ ಜೊತೆಗೂಡಿಸಿಕೊಂಡು ಹೋಗಬಲ್ಲವರು ಎಂದು ಕಾಂಗ್ರೆಸ್ ಅಲ್ಲದವರೂ ಅಭಿಪ್ರಾಯಪಡುವುದಿದೆ.

ಇದಲ್ಲದೆ ಯು.ಕೆ. ಶಾಮಣ್ಣನಿಗೆ ಕೆ.ಹೆಚ್. ಪಾಟೀಲರ ಒಲವಿದೆಯಂತೆ; ಡಯಾಸ್‌ರು ಆಸ್ಕರ್ ಫರ್ನಾಂಡಿಸರ ಬೆನ್ನು ಹತ್ತಿದ್ದಾರಂತೆ; ರಮೇಶ್ ರಾಯರು ಅತ್ಯಂತ ಮೇಲ್ಮಟ್ಟದಲ್ಲೇ ಎಲ್ಲ 'ಫಿಕ್ಸ್' ಮಾಡಿಕೊಂಡು ಬಿಟ್ಟಿದ್ದಾರಂತೆ.... ಮುಂತಾಗಿ ಒಬ್ಬೊಬ್ಬ ಆಕಾಂಕ್ಷಿಗೆ ಒಬ್ಬೊಬ್ಬ 'ಗಾಡ್ ಫಾದರ್' ಗಳ ಹೆಸರನ್ನು ತಳಕು ಹಾಕಿದ ಅಂತೆಗಳು ಕಂತೆಗಟ್ಟಲೆ ಕೇಳಿ ಬರುತ್ತವೆ. ರಾಮಪ್ಪಯ್ಯ, ಚಿನ್ನೇಗೌಡ ಕೂಡ ತಮ್ಮೆಲ್ಲ ಸಾಮರ್ಥ್ಯ ಉಪಯೋಗಿಸಿ ಪ್ರಯತ್ನ ನಡೆಸಿದ್ದಾರೆ.

ಆದರೆ, ಇಷ್ಟೆಲ್ಲ ಆಕಾಂಕ್ಷಿಗಳಿದ್ದರೂ ಈ ಸಾರಿ ತಮಗಾಗುವ ನಿರಾಶೆಗಾಗಿ ಬಂಡಾಯವೇಳುವ ಮಟ್ಟಿಗಂತೂ ಯಾರೂ ಹೋಗುವುದಿಲ್ಲವೆಂಬುದು ಖಚಿತ. ನಾಯಕತ್ವವನ್ನು ಎದುರು ಹಾಕಿಕೊಂಡು ಸ್ವಯಂ ನಿರ್ನಾಮವಾಗಿರುವ ಅಂತುಳೆ, ಖಾನ್ ಮುಂತಾದವರ ಉದಾಹರಣೆಗಳು ಎಲ್ಲರಿಗೂ ತೂಗುಕತ್ತಿಯಾಗಿ ಕಾಣುತ್ತಿದೆ.

ಇತ್ತ ಜನತಾದವರ ಸಂದಿಗ್ಧತೆಯೂ ಎದ್ದು ಕಾಣುತ್ತಿದೆ. ಕ್ಷೇತ್ರದ ಮಟ್ಟಿಗೆ ಜನತಾ ಅಭ್ಯರ್ಥಿ ಗೆಲ್ಲುವ ಸಾಧ್ಯತೆ ಕಾಂಗ್... ನವರಿಗಿಂತ ಕಮ್ಮಿ ಎಂದೇ ಈವರೆಗೂ ತೋರುತ್ತಿದೆ. ಇಂಥ ಸೋಲಿನೆದುರು ಸ್ಪ... ರ್ಧಿಸಲು ಸಹಜವಾಗಿಯೇ ಹೆಚ್ಚು ಜ... ಮುಂದೆ ಬರುವುದಿಲ್ಲ.

ಗೋವಿಂದ ಗೌಡರಿಗೆ ಸಹ ತಮ್ಮ ... ಯಕ್ತಿಕ ಮತ್ತು ಪಕ್ಷದ ದೌರ್ಬಲ್ಯ... ಅರಿವು ಉಂಟಾಗಿರುವಂತೆ ಕಾಣುತ್ತಿದೆ ... ಡಿ.ಬಿ. ಚಂದ್ರೇಗೌಡ ಸ್ಪರ್ಧಿಸಿದರೆ ಜನತಾ ... ಗೆಲುವು ಇನ್ನೂ ಕಷ್ಟ ಎಂಬ ವಾ... ವೊಂದಿದೆ. ಹಾಗಿರುವಾಗ ಬೇರೆ ಅಭ್ಯರ್ಥಿ... ಗಳು ಮುಂದೆ ಬಾರದಿದ್ದರೆ ಗೋವಿಂ... ಗೌಡರಿಗೆ-ಮುನ್ನುಗ್ಗಲು ಧೈರ್ಯ ಸಾಲದ... ಹಿಂದೆ ಸರಿಯಲು ಆಸ್ಪದವಿಲ್ಲ ಎಂಬ ... ದಿಗ್ಧ ಉಂಟಾಗಿರಬಹುದು. ಪಕ್ಷದ ... ಘಟನೆ ಕೂಡ ಎಲ್ಲೂ ಹೇಳಿಕೊಳ್ಳುವ... ಬಿಗುವಿನಿಂದ ಕೂಡಿಲ್ಲದಿರುವುದೂ ಇ... ತೊಳಲಾಟವನ್ನು ಇಮ್ಮಡಿಸಿದೆ.

ಅಂತೂ ಎಲ್ಲ ಸಂದಿಗ್ಧಗಳೂ ... ಗೊಳ್ಳಲು, ಇನ್ನೂ ಚುನಾವಣೆಯ ದಿನ... ಕವೇ ಪ್ರಕಟವಾಗಿಲ್ಲ. ಇದು ಕೂಡ ... ರ್ಥಿಗಳ (ಅಥವಾ ಆಕಾಂಕ್ಷಿಗಳ) ಚಡಪ... ಹೆಚ್ಚಲು ಕಾರಣವಾಗಿದೆ.

ವಿಧಾನಸಭಾ ಚುನಾವಣೆ

# ...ಗೇರಿ ಕ್ಷೇತ್ರಕ್ಕೆ ಅಭ್ಯರ್ಥಿ ಯಾರು ಯಾರು?

...ನು ರಾಜ್ಯ ವಿಧಾನಸಭೆಗೆ ಚುನಾ... ದಿನ ಧಾವಿಸಿ ಬರುತ್ತಿದೆ. ಕಾಂಗ್ರೆ... ವರು ಕೇಂದ್ರದಲ್ಲಿ ತಮ್ಮ ಪಕ್ಷ 508 ...401 ಸ್ಥಾನ ಗಳಿಸಿರುವ ಹಿನ್ನೆಲೆ... ಬಹಳ ಹುಮ್ಮಸ್ಸಿನಲ್ಲಿ ಇದ್ದಾರಾದರೂ ...ಶಿರನ ಫಲಿತಾಂಶ ರಾಜ್ಯದಲ್ಲೂ ಬರು... ಸಾಧ್ಯವಾಗಲಾರದು ಎಂಬ ವಾಸ್ತ... ಭಯವೂ ಅವರ ಆಳದಲ್ಲಿರುವುದು ಅವ... ಮಾತನಾಡಿಸಿದಾಗ ತಿಳಿಯುತ್ತದೆ. ...ತ್ತ, ಜನತಾ-ಬಿಜೆಪಿ ಮೈತ್ರಿ ...ಮುಂದುವರಿಯುವುದೇ ಇಲ್ಲವೆ, ಅವು ಮೈತ್ರಿ ...ಡಿಕೊಂಡರೆ ಸಿಪಿಐ-ಸಿಪಿಎಂ ಪಕ್ಷಗಳು ...ತಾ ಜೊತೆ ಹೊಂದಾಣಿಕೆ ಮಾಡಿ ...ಸ್ಪರ್ಧೆಯೆ ಮುಂತಾದ ಲೆಕ್ಕಾಚಾರ ...ಒಂದು ಕಡೆ ನಡೆಯುತ್ತಿದ್ದರೆ ಇನ್ನೊಂದೆಡೆಯಲ್ಲಿ ವಿರೋಧ ಪಕ್ಷಗಳ ಸೋಲಿಗೆ "ನೀವು ಕಾರಣ-ನೀವು ಕಾರಣ" ಎಂಬ ಕಚ್ಚಾಟ, "ಅವರ ಜೊತೆ ಹೊಂದಾಣಿಕೆ ಬೇಡ", "ಇವರು ಕೃತಘ್ನರು" ಮುಂತಾದ ದೂಷಣೆ-ದೋಷಾರೋಪಣೆಗಳು ಕಾಂಗ್ರೆಯವರಿಗೆ (ಮತ್ತು ಹೊರ ಪ್ರಪಂಚದವರಿಗೆ) ಮಜ ಕೊಡುತ್ತಿವೆ.

ಈ ಮಧ್ಯೆ ಕರ್ನಾಟಕ ರಾಜ್ಯ ರೈತ ಸಂಘ ಮತದಾರರ ವೇದಿಕೆಯ ಮೂಲಕ ಪುನಃ ಚುನಾವಣೆಗೆ ಇಳಿಯುವ ಸೂಚನೆ ಕೊಟ್ಟಿದೆ. ಅತ್ತ ಸಿಪಿಐ-ಸಿಪಿಎಂಗಳು ಈ ಬಾರಿ ಇನ್ನೂ ಹೆಚ್ಚು ಸ್ಥಾನಗಳಿಗೆ ಸ್ಪರ್ಧಿಸಲು ಸಿದ್ಧವಾಗಿ ನಿಂತಿವೆ.

ಇಂದಿರಾ ಕೃತಜ್ಞತೆಯ ಅಲೆಯ ಪ್ರಭಾವ ಅಳಿದಿದೆಯೆಂದು ಇನ್ನೂ ಹೇಳಲು ಬಾರದಿರುವುದು ಒಂದು ಕಡೆಯಾದರೆ, ಮಧ್ಯವರ್ಗ ವಿದ್ಯಾವಂತರನ್ನೂ ಸಹ ರಾಜೀವ್ ಗಾಂಧಿಯ ಹೇಳಿಕೆ-ಘೋಷಣೆ-ಭಾಷಣಗಳು ತಲೆದೂಗಿಸುತ್ತಿರುವ ಈ ಸಮಯದಲ್ಲಿ, ವಿರೋಧೀ ಮತಗಳು ಹಂಚಿ ಹೋಗುವ ಲಕ್ಷಣಗಳು ಸಹ ಕಾಣುತ್ತಿವೆ.

ಚಿಕ್ಕಮಗಳೂರು ಜಿಲ್ಲೆಗೆ ಬಂದರೆ, ಇಲ್ಲಿ ಸಿಪಿಐ ಮೂಡಿಗೆರೆ, ತರೀಕೆರೆ, ಬೀರೂರು, ಚಿಕ್ಕಮಗಳೂರು-ಈ 4 ಸ್ಥಾನಗಳಿಗೆ ನಿಲ್ಲಲು ಇಚ್ಛಿಸಿದ್ದು, ರಾಜ್ಯಮಟ್ಟದಲ್ಲಿ ಹೊಂದಾಣಿಕೆ ನಡೆದರೆ ಕನಿಷ್ಠ 2 ಸ್ಥಾನಗಳನ್ನು ನಿರೀಕ್ಷಿಸುತ್ತಿದೆ. ಬಿಜೆಪಿಯ ಘಟಕಗಳು ಯಥಾಪ್ರಕಾರ 'ಹೊಂದಾಣಿಕೆ ಬೇಡ-ಸ್ವತಂತ್ರವಾಗಿ ಸ್ಪರ್ಧಿಸೋಣ' ಎಂಬ ನಿರ್ಣಯದ ಪತ್ರಿಕಾ ಹೇಳಿಕೆಗಳನ್ನು ಹೊರಡಿಸಿವೆ. ಜನತಾ ಪಕ್ಷ ಕಾಲು ಒಳಿಯದೆ ದೇಹ ಬಲಿತ ಹೇವರ್ನಾಯೇ ಸಂಗೊಳಿಸುತ್ತಿದೆ.

ಈಗ ಶೃಂಗೇರಿ ಕ್ಷೇತ್ರದ ಬಗ್ಗೆ ಮಾತಾಡುವುದೆಂದರೆ ಕಾಂಗ್ರೆ ಪಕ್ಷದ ಬಗ್ಗೆ ಮಾತಾಡುವುದೆಂದೇ ಅರ್ಥ. ಇಲ್ಲಿ ಜನತಾ ಪಕ್ಷದಿಂದ ಮಾಜಿ ಎಂಎಲ್ಎ ಗೋವಿಂದ ಗೌಡರು 'ಊಹೂಂ, ನನಗೆ ಸಾಕು, ಅವರಿಗೆ ಬಿಡಿಸಿ' ಎನ್ನುತ್ತಿದ್ದಾರಂತೆ ಎಂಬ ವರದಿಗಳ ಹಿಂದೆಯೇ, "ನಾನಿನ್ನೂ ತೀರ್ಮಾನ ತಗಂಡಿಲ್ಲ. ಜನ ಏನು ಹೇಳ್ತಾರೆ, ಅವರ ಮೂಡ್ ಹೇಗಿದೆ ನೋಡಿಕೊಂಡು ತೀರ್ಮಾನಿಸಬೇಕಾಗಿದೆ" ಎನ್ನುತ್ತಿದ್ದಾರೆ.

ಇಲ್ಲಿಂದ ಡಿ. ಬಿ. ಚಂದ್ರೇಗೌಡರು ನಿಲ್ಲುತ್ತಾರಂತೆ ಎಂಬ ವದಂತಿಯೂ ಇದೆ. ರಾಮಕೃಷ್ಣ ಹೆಗಡೆಯೇ ನಿಲ್ಲುತ್ತಾರಂತೆ ಎಂಬ ವದಂತಿಯೂ ಹೊರಟಿದ್ದುಂಟು. ಕ್ಷೇತ್ರ ಜನತಾದ ನಂ. 2 ಎಂದು ಪರಿಗಣಿತರಾಗಿರುವ ಮೂಗ ಚಂದ್ರಶೇಖರ್ ಈ ಬಾರಿ ಅಷ್ಟೇನೂ ಉತ್ಸುಕರಾಗಿರುವಂತೆ ಕಾಣುವುದಿಲ್ಲ. ಸದ್ಯಕ್ಕೆ ಜನತಾದಿಂದ ಇನ್ಯಾವ ಹೆಸರೂ ಇಲ್ಲಿ ಕೇಳಿ ಬರುತ್ತಿಲ್ಲ.

ಕೊನೆಯದಾಗಿ ಕಾಂಗ್ರೆ ಪಾಳಯಕ್ಕೆ ಬನ್ನಿ. ಎಷ್ಟು ಜನ ಉಮೇದುವಾರರು ಕಾಣುತ್ತಿದ್ದಾರೆ? ಹದಿನಾರೆ? ಇನ್ನೂ ಹೆಚ್ಚು? ಒಬ್ಬೊಬ್ಬರೇ ಒಳಗೆ ಬರುತ್ತಿದ್ದಾರಾ? ನಿಜ ನಿಜ. ಬಹುಶಃ ಇವತ್ತು ಕಾಂಗ್ರೆಯೊಳಗೆ ದೇಶಾದ್ಯಂತವೂ ಇದೇ ಪರಿಸ್ಥಿತಿಯಿರಬೇಕು. ಕಾಂಗ್ರೆ ಅಲೆಯಿದೆ, ಯಾರು ನಿಂತರೂ ಗೆಲ್ಲುವ ಚಾನ್ಸ್. ಇಂಥ ಅವಕಾಶ ಯಾರಾದರೂ ಯಾಕೆ ಬಿಟ್ಟು ಕೊಡುತ್ತಾರೆ ಅಲ್ಲವೇ?

ಅದಕ್ಕೇ ಪಕ್ಷದ ಟಿಕೆಟ್ಟಿಗಾಗಿ ನೂಕುನುಗ್ಗಲು. ಎಲ್ಲ ಆಕಾಂಕ್ಷಿಗಳೂ ತಮ್ಮ ತಮ್ಮ ಅರ್ಹತೆಯ ಬಗ್ಗೆ ಪಟ್ಟಿ-ತಪಶೀಲುಗಳು. ಜೊತೆಗೇ ಕ್ಷೇತ್ರದ ಮೂರೂ ತಾ॥ಗಳಲ್ಲಿ ತಮಗೆ ಹೇಗೆ ಸಂಪರ್ಕ-ಬೆಂಬಲ ಇದೆ ಎಂಬ ಬಗ್ಗೆ ವಿವರಗಳು. ಯಾರಿಗೆ ಟಿಕೆಟ್ ಸಿಗಬಹುದೆಂಬ ಲೆಕ್ಕಾಚಾರ, ಆಸೆ, ಕಾತರ, ಭಯ; ನಿರಾಸೆಗೆ ಸಿದ್ಧತೆ....

ಇಲ್ಲಿ ಕಾಂಗ್ರೆ ಅಭ್ಯರ್ಥಿಯಾಗಿ ಕೇಳಿ ಬರುವ ಮೊದಲ ಹೆಸರು ಸಹಜವಾಗಿ ಬೇಗಾನೆ ರಾಮಯ್ಯ ಅವರದು. ಈ ಕ್ಷೇತ್ರವನ್ನು ಹಿಂದೆ ಪ್ರತಿನಿಧಿಸಿದ್ದಲ್ಲದೆ ಏಕ್‌ದಂ ಕ್ಯಾಬಿನೆಟ್ ಮಂತ್ರಿಯೂ ಆಗಿದ್ದವರು. ಪ್ರದೇಶ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರು, ಪಕ್ಷದ ಉನ್ನತ ವಲಯಗಳಲ್ಲಿ ಸಹ ಪರಿಚಯ-ಬೆಂಬಲ ಇರುವಂಥವರು. ಹೈಕಮಾಂಡ್ ಇವರ ಕೈ ಬಿಡಲಿಕ್ಕಿಲ್ಲವೆಂಬ ಲೆಕ್ಕಾಚಾರ.

ಟಿಕೆಟ್ಟಿಗಾಗಿ ಪ್ರಯತ್ನಿಸುತ್ತಿರುವವರ ಪೈಕಿ ಎರಡನೆಯ ಸಾಲಿನಲ್ಲಿ ಕೇಳಿಬರುವ ಹೆಸರುಗಳು ಬಿ.ಜಿ. ಚಿದಂಬರ್, ಯು.ಕೆ. ಶಾಮಣ್ಣ, ಕೆ.ಟಿ. ಚಿನ್ನಯ್ಯಗೌಡ, ಎ. ರಮೇಶ್ ರಾವ್, ಕೆ.ವಿ. ರಾಮಪ್ಪಯ್ಯ, ಎಲಿಯಾಸ್ ಡಯಾಸ್ ಇವರುಗಳದು. 3 ನೆಯ ಸಾಲಿನಲ್ಲಿ ಡಾ॥ ಹುಲ್ಸೆ ಮಂಜಪ್ಪ ಗೌಡ, ಮೂಗ ಶ್ರೀನಿವಾಸ್, ಅಬ್ದುಸ್ ಸಮದ್, ಎ.ಸಿ. ವಜ್ರಪ್ಪ, ಕೆ. ಆರ್. ಸತೀಶ್, ಶಂಕರ ಹೆಗ್ಡೆ, ಇತ್ಯಾದಿ, ಇತ್ಯಾದಿಗಳಿದ್ದಾರೆ.

ಇವರಲ್ಲದೆ ಮೂವರು ಮಹಿಳೆಯರೂ ಟಿಕೆಟ್ಟಿಗಾಗಿ ಸ್ಪರ್ಧಿಸುತ್ತಿದ್ದಾರೆನ್ನಲಾಗಿದೆ. ಬೇಳಗದ್ದೆ ಪುಟ್ಟೇಗೌಡರ ಮಗಳಾದ ಈಗ-ಮೂಡಿಗೆರೆ ತಾಲ್ಲೂಕಿನವರಾಗಿರುವ ರತ್ನಮ್ಮ, ವಿಸರ್ಜಿತ ಕೊಪ್ಪ ತಾ. ಅ.ಮಂ ಉಪಾಧ್ಯಕ್ಷೆ ಸುಮಿತ್ರಮ್ಮ, ನ.ರಾ.ಪುರ ತಾ॥ ಕಾಂಗ್ರೆ ಮಹಿಳಾ ವಿಭಾಗದ ಸಂಚಾಲಕಿ ವನಮಾಲ ಇವರುಗಳೇ ಆ ಮೂವರು.

2 ನೇ ಸಾಲಿನ ಆಕಾಂಕ್ಷಿಗಳಲ್ಲಿ ಹಲವರು ಈ ಹಿಂದೆಯೂ ಟಿಕೆಟ್ಟಿಗಾಗಿ ಸ್ಪರ್ಧಿಸಿ ನಿರಾಶೆಯುಂಡವರು. ಆದರೆ ಬಹಳ ಕಾಲದಿಂದಲೂ ಪಕ್ಷದಲ್ಲಿರುತ್ತ, ಸಾರ್ವಜನಿಕ ರಾಜಕೀಯದಲ್ಲೂ ಹಲವು ರಂಗಗಳಲ್ಲಿ ಕೈಯಾಡಿಸಿ ಪಳಗಿದವರು.

ಬಿ.ಜಿ. ಚಿದಂಬರ್ ಕೊಪ್ಪ ತಾ. ಅ. ಮಂ. ಅಧ್ಯಕ್ಷರಾಗಿ ಐ.ಡಿ.ಪಿ., ಐ.ಆರ್. ಡಿ.ಪಿ., ಎನ್.ಆರ್.ಇ.ಪಿ. ಮುಂತಾದ ಯೋಜನೆಗಳ ಮೂಲಕ ತಾಲ್ಲೂಕಿನಾದ್ಯಂತ ಲಕ್ಷಾಂತರ ರೂ. ಕಾಮಗಾರಿಗಳನ್ನು ನಡೆಸಿ ತಮ್ಮ ಗುರುತು ಮೂಡಿಸಿದ್ದಾರೆ.

ಯು.ಕೆ. ಶಾಮಣ್ಣ ಹಿಂದಿನಿಂದ ಪಕ್ಷದಲ್ಲಿದ್ದರೂ ಸಾರ್ವಜನಿಕವಾಗಿ ಅಷ್ಟಾಗಿ ಕಾಣಿಸಿಕೊಂಡವರಲ್ಲ. ಆದರೆ ಸಹಕಾರಿ ರಂಗದಲ್ಲಿ ಬಹಳ ಹೆಸರು ಮಾಡಿ, ರಾಜ್ಯದ ಸಹಕಾರಿ ಅಪೆಕ್ಸ್ ಬ್ಯಾಂಕಿನ ನಿರ್ದೇಶಕರೂ ಆಗಿರುವವರು.

ಕೆ.ಟಿ. ಚಿನ್ನಯ್ಯ ಗೌಡ ನ.ರಾ. ಪುರ ತಾ.ಅ.ಮಂ. ಅಧ್ಯಕ್ಷರಾಗಿ ಬೇಗಾನೆ ರಾಮಯ್ಯನವರ ಕಾಲದಲ್ಲಿ ಕಾಂಗ್ರೆಸ್ಸನ್ನು ಹಬ್ಬಿಸಿದವರು. ಬಾಳೆಹೊನ್ನೂರು ಪಂಚಾಯ್ತಿಯನ್ನು ಅಭಿವೃದ್ಧಿಪಡಿಸಿದವರೆನ್ನುವ ಹೆಸರು ಹೊತ್ತವರು. ತಾಲ್ಲೂಕಿನಲ್ಲಿ ನ.ರಾ. ಪುರ ಹೋಬಳಿಯನ್ನು ಕಡೆಗಣಿಸಿ ಬಾಳೆಹೊನ್ನೂರು ಹೋಬಳಿಯನ್ನು ಮಾತ್ರ ಬೆಳೆಸಿದವರೆಂಬ ಟೀಕೆ ಇದೆಯಾದರೂ, ಈ ತಾಲ್ಲೂಕಿನ ಕಾರ್ಯಕರ್ತರ ಬೆಂಬಲ ಇವರಿಗೆ ಚೆನ್ನಾಗಿದೆಯೆಂದು ಹೇಳಲಾಗುತ್ತಿದೆ.

(3 ನೇ ಪುಟಕ್ಕೆ)

# ಹುಲಿ ಮತ್ತು 'ಮುಂಜಾವು'

...ಶೃಂಗೇರಿ ಪೇಟೆಗೆ ಹುಲಿ (ಚಿರತೆ) ಬರು...ಕ್ಕೆ 8-10 ದಿನ ಮೊದಲು ನಾನು ...ಪ್ಪದಲ್ಲಿ ವಿಭಾಗ ಅರಣ್ಯಾಧಿಕಾರಿ ...ಯರ್ ಲೂಥ್ರ ಅವರನ್ನು ಭೇಟಿ ಮಾ...ಟ್ಟೆ. ಆದಕ್ಕೆ 3-4 ದಿನ ಮುಂಚೆ ನಮ್ಮ ...ಮನೆಯ ತೋಟಕ್ಕೆ ಮನೆ...ಯಿಂದ ಕೇವಲ 50 ಗಜ ದೂರದಲ್ಲಿ ಸಂಜೆ ...30 ರ ಹೊತ್ತಿಗೆ ಹುಲಿ ಬಂದಿತ್ತಂತೆ. ...ತೋಟಕ್ಕೆ ಹೋಗಿದ್ದ ನಮ್ಮ ಒಬ್ಬ ಯುವ...ನಿಗೆ ಅದು ಸಿಕ್ಕಿದ ಎದುರಾಗಿ, ಅವನಿಗೆ ...ಲೂ ಆಗದಷ್ಟು ಗಂಟಲೊಣಗಿ ಹೋ...ತ್ತಂತೆ. ಅಲ್ಲೇ ತೋಟದ ಮೇಲ್ಗಡೆ ನಮ್ಮ ...ಡೆ ದನ ಹೊಡೆದುಕೊಂಡು ಬರುತ್ತಿದ್ದ...ತೆ.

...ಹೀಗೆ ಹುಲಿಗಳು ಹಾಡೇ ಹಗಲು ದಾರಿ...ಯಲ್ಲಿ ಎದುರಾಗುವುದು, ರಾತ್ರಿ ಮನೆಗೇ ...ಬಂದು ಕೊಟ್ಟಿಗೆಯಲ್ಲೇ ಕೂತು ದನ ಕರು...ಗಳನ್ನು ತಿಂದು ಹೋಗುವುದು ಸಾಮಾನ್ಯ...ವಾಗಿಬಿಟ್ಟಿದೆ. ಆರೆಂಟು ವರ್ಷದ ಶಾಲಾ ಮಕ್ಕಳೂ ದಿನಾ ನಾಲ್ಕು ಮೈಲಿ ದೂರ ...ಕಾಡಲ್ಲಿ ನಡೆಯಬೇಕಾಗುವುದರಿಂದ ಇವು ...ಯಾವಾಗ ಮನುಷ್ಯ ಮಾಂಸದ ರುಚಿ ...ಹಿಡಿಯುತ್ತವೋ ಎಂಬ ಭಯದಲ್ಲೇ ಜನ...ಕಾಲ ತಳ್ಳುತ್ತಿದ್ದಾರೆ.

ನಾನು ಡಿಎಫ್‌ಒ ಅವರಿಗೆ ಈ ವಿಷಯ...ವನ್ನೆಲ್ಲ ವಿವರಿಸಿ, ಆ ಪ್ರದೇಶದಿಂದ ಹುಲಿ...ಗಳನ್ನು ಹಿಡಿದು ಅಭಯಾರಣ್ಯಕ್ಕೆ ಸಾಗಿಸ...ಬೇಕೆಂಬ ನಮ್ಮ ಜನರ ಒತ್ತಾಯವನ್ನು ...ಅವರಿಗೆ ತಿಳಿಸಿದೆ. ಅದಕ್ಕವರು ಹಾಗೆ ಹುಲಿ...ಗಳನ್ನು ಹಿಡಿಯುವುದರ ದುಷ್ಪರಿಣಾಮ...ವನ್ನು ವಿವರಿಸಿದರೂ ನನ್ನ ಒತ್ತಾಯದಿಂ...ದಾಗಿ ನಮ್ಮ ಹಳ್ಳಿಗೆ ಡಿ. 28-29ರ ಹೊ...ತ್ತಿಗೆ ಭೇಟಿಕೊಟ್ಟು ಪರಿಶೀಲಿಸುವುದಾಗಿ ...ಭರವಸೆ ಕೊಟ್ಟಿದ್ದರು.

ಅವರು ಬಹುಶಃ ಈ ಬಗ್ಗೆ ಶೃಂಗೇರಿ ...ವಲಯ ಅರಣ್ಯಾಧಿಕಾರಿಗಳ ಜೊತೆ ಚರ್ಚಿ...ಸಿರಬೇಕು. ಅವರು ನಮ್ಮ ಶೃಂಗೇರಿ ಪ್ರತಿ...ನಿಧಿ ಕಲ್ಕುಳಿ ವಿಠಲ ಹೆಗ್ಡೆಯವರು ಸಿಕ್ಕಾಗ, "ಏನ್ರೀ ನಿಮ್ಮ ಸಂಪಾದಕರು ನಮ್ಮ ಡಿಎಫ್‌ಒ ಹತ್ತಿರ ಶೃಂಗೇರಿ ಪೇಟೆಗೇ ಹುಲಿ ಬಂದಿರುವ ಹಾಗೆ ಮಾತಾಡಿದ್ದಾರಲ್ರೀ" ಎಂದು ತಮಾಷೆ ಮಾಡಿದ್ದರಂತೆ.

**ಅದಾಗಿ ಎರಡೇ ದಿನಕ್ಕೆ, ಶೃಂಗೇರಿ ಪೇಟೆಗೇ 'ಹುಲಿ' ಬಂದೇ ಬಂತು ನೋಡಿ!**

ಹುಲಿಗೂ 'ಮುಂಜಾವು' ಗೂ ಹೇಗಿದೆ ನಂಟು?

(ಈ 'ನಂಟು' ನಮ್ಮ ಪತ್ರಿಕೆ ಆರಂಭವಾದಾಗಿನಿಂದಲೂ ಬೆಳೆದು ಬಂದಿದೆ. ಈ ಕಾರಣದಿಂದಾಗಿಯೇ ಶೃಂಗೇರಿ ಹುಲಿಯ ವರದಿ ನಮ್ಮ 6.1 85 ರ ಸಂಚಿಕೆಯಲ್ಲಿ ಪ್ರಕಟವಾಗದೆ ತಡವಾಯಿತು.

ಹೇಗೆಂದರೆ, ಶನಿವಾರವೇ ಬಿಡುಗಡೆಯಾಗುವ ನಮ್ಮ ಪತ್ರಿಕೆ ಶುಕ್ರವಾರ (ಜ. 4) ಮಧ್ಯಾಹ್ನ ಮುಕ್ತಾಯದ ಹಂತದಲ್ಲಿದ್ದಾಗ "ಶೃಂಗೇರಿ ಪೇಟೆಗೆ ಹುಲಿ ಬಂದಿತ್ತಂತೆ" ಎಂಬ ಸುದ್ದಿ ತಿಳಿಯಿತು. ಆದರೆ ನಮಗೆ ಹುಲಿ ಹಾವಳಿಯ ವರದಿಗಳು ದಿನವೂ ಎಷ್ಟು ಬರುತ್ತಿವೆಯೆಂದರೆ (ಹಾಗೂ ನಮ್ಮ ಮನೆಗೇ ಹುಲಿ ಬರುತ್ತಿರುವುದರಿಂದ) ಈ ಸುದ್ದಿ ಹೇಗೋ ನಮ್ಮ ಗಮನಕ್ಕೆ ಅಷ್ಟಾಗಿ ಬರದೇ ಅದನ್ನು ವರದಿ ಮಾಡುವುದರಲ್ಲಿ ನಾವು ಹಿಂದೆ ಬೀಳುವುದಕ್ಕೆ ಕಾರಣವಾಯಿತು.

1983 ರ ಜೂನ್ ತಿಂಗಳಲ್ಲಿ 'ಸುಧಾ' ವಾರ ಪತ್ರಿಕೆಯಲ್ಲಿ "ಕೊಟ್ಟಿಗೆಯಲ್ಲಿ ಹುಲಿ" ಅಗ್ರಲೇಖನ ಬಂದಿತ್ತಷ್ಟೆ. ಅದನ್ನು ಬರೆದ 'ನಾಡಿ' ಅವರನ್ನು ನಾನೇ ನಮ್ಮ ಹಳ್ಳಿ ಮತ್ತು ನ.ರಾ. ಪುರ ತಾಲ್ಲೂಕಿನ ಕೆಲವು ಹಳ್ಳಿಗಳಿಗೆ ಕರೆದುಕೊಂಡು ಹೋಗಿ, ಸ್ಥಳ ಪರಿಶೀಲನೆ ಮತ್ತು ಹಳ್ಳಿಗರಿಂದ ವಿಷಯ ಸಂಗ್ರಹಣೆಗೆ ನೆರವಾಗಿದ್ದೆ. ಅಲ್ಲದೆ ಅವರಿಗೆ ನಮ್ಮ ಪತ್ರಿಕೆಯಲ್ಲಿ ಬಂದಿದ್ದ ಎಲ್ಲಾ ಹುಲಿ ವರದಿಗಳನ್ನೂ ಆ ಲೇಖನ ಬಳಸಿಕೊಂಡಿದ್ದನ್ನು ನೀವು ಗಮನಿಸಿರಬಹುದು.)

—ಶಿರಿಮನೆ ನಾಗರಾಜ್.